# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೯<br>Volume 149 | ಬೆಂಗಳೂರು, ಗುರುವಾರ, ಏಪ್ರಿಲ್ ೨೪, ೨೦೧೪ (ವೈಶಾಖ ೪, ಶಕ ವರ್ಷ ೧೯೩೬)<br>Bangalore, Thursday, April 24, 2014 (Vaishakha 4, Shaka Varsha 1936) | ಸಂಚಿಕೆ ೧೭<br>Issue 17 |
|---|---|---|


## ಭಾಗ ೫

## ಸರ್ಕಾರದ ಮತ್ತು ಖಾಸಗಿ ಜಾಹೀರಾತುಗಳು, ಲೋಕಸೇವಾ ಆಯೋಗದ ಜಾಹೀರಾತುಗಳು, ನೇಮಕಾತಿ ಸಮಿತಿಗಳ ಜಾಹೀರಾತುಗಳು

**ನೇಮಕಾತಿ ಪ್ರಕಟಣೆ**

**ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ರಾಮನಗರ**

**ಅಧಿಸೂಚನೆ ಸಂಖ್ಯೆ: ಎಡಿಎಂ. 17/2014, ದಿನಾಂಕ: 26.03.2014.**

**ವಿಷಯ :** ಶೀಘ್ರಲಿಪಿಗಾರರು ಮತ್ತು ಬೆರಳಚ್ಚುಗಾರರ ಹುದ್ದೆಗೆ ಅಭ್ಯರ್ಥಿಗಳನ್ನು ಆಯ್ಕೆ ಮಾಡುವ ಬಗ್ಗೆ.

**ಉಲ್ಲೇಖ:**

1) ಈ ಕಚೇರಿ ಅಧಿಸೂಚನೆ ಸಂಖ್ಯೆ: ಆಡಳಿತ 28/2013, ದಿನಾಂಕ: 28.08.2013 ರ ಅನ್ವಯ ಉಳಿದಿರುವ ಶೀಘ್ರಲಿಪಿಗಾರರು (ಬ್ಯಾಕ್‌ಲಾಗ್) ಹುದ್ದೆಗಳನ್ನು ಭರ್ತಿ ಮಾಡಿಕೊಳ್ಳಲು.
2) ಈ ಕಚೇರಿ ಅಧಿಸೂಚನೆ ಸಂಖ್ಯೆ: ಆಡಳಿತ 29/2013, ದಿನಾಂಕ: 08.10.2013 ರ ಅನ್ವಯ ಉಳಿದಿರುವ ಶೀಘ್ರಲಿಪಿಗಾರರು (ಬ್ಯಾಕ್‌ಲಾಗ್) ಹುದ್ದೆಗಳನ್ನು ಭರ್ತಿ ಮಾಡಿಕೊಳ್ಳಲು.
3) ಈ ಕಚೇರಿ ಅಧಿಸೂಚನೆ ಸಂಖ್ಯೆ: ಆಡಳಿತ 12/2013, ದಿನಾಂಕ: 27.02.2013 ರ ಅನ್ವಯ ಉಳಿದಿರುವ ಬೆರಳಚ್ಚುಗಾರ (ಬ್ಯಾಕ್‌ಲಾಗ್) ಹುದ್ದೆಯನ್ನು ಭರ್ತಿ ಮಾಡಿಕೊಳ್ಳಲು.

ಮೇಲ್ಕಂಡ ಅಧಿಸೂಚನೆಯನ್ವಯ ರಾಮನಗರ ಜಿಲ್ಲಾ ನ್ಯಾಯಾಲಯ ಘಟಕದ ಅಧೀನ ನ್ಯಾಯಾಲಯಗಳಲ್ಲಿ ಖಾಲಿ ಇರುವ ಶೀಘ್ರಲಿಪಿಗಾರರು ಮತ್ತು ಬೆರಳಚ್ಚುಗಾರರ ಹುದ್ದೆಗಳಿಗೆ ಅರ್ಹ ಅಭ್ಯರ್ಥಿಗಳಿಂದ ಅರ್ಜಿಗಳನ್ನು ಆಹ್ವಾನಿಸಿದೆ. ನಿಗದಿ ಪಡಿಸಿದ ಅರ್ಜಿ ನಮೂನೆಯಲ್ಲಿ ಅಭ್ಯರ್ಥಿಗಳು ತಮ್ಮ ಸ್ವಂತ ಕೈಬರಹದಿಂದ ಎಲ್ಲಾ ಅಂಕಣಗಳನ್ನು ಜಾಗರೂಕತೆಯಿಂದ ಭರ್ತಿ ಮಾಡಿ **ದಿನಾಂಕ: 09.05.2014 ರ ಶುಕ್ರವಾರ ಸಂಜೆ 4.00 ಗಂಟೆಯ ಒಳಗೆ ಸಲ್ಲಿಸತಕ್ಕದ್ದು.**

**ಅರ್ಜಿಗಳನ್ನು ಸಲ್ಲಿಸಲು ನಿಗದಿ ಮಾಡಿದ ಕೊನೆಯ ದಿನಾಂಕ: 09.05.2014 ರ ಶುಕ್ರವಾರ ಸಂಜೆ 4.00 ಗಂಟೆಯವರೆಗೆ**

**ಖಾಲಿ ಇರುವ ಹುದ್ದೆಗಳ ವರ್ಗೀಕರಣ:**

**I . ಶೀಘ್ರಲಿಪಿಗಾರರ ಹುದ್ದೆ**

1. ಹುದ್ದೆಗಳ ಸಂಖ್ಯೆ: 06
2. ವೇತನ ಶ್ರೇಣಿ : 14550–350–15600–400–17200–450–19000–500–21000–600–24600–700–26700 ಹಾಗೂ ಲಭ್ಯವಿರುವ ಇತರೆ ಭತ್ಯೆಗಳು.
3. **ಹುದ್ದೆಗಳ ವರ್ಗೀಕರಣ :**

| ವರ್ಗೀಕರಣ | ಇತರೆ | ಮಹಿಳಾ | ಒಟ್ಟು |
|---|---|---|---|
| ಸಾಮಾನ್ಯ (ಬ್ಯಾಕ್ ಲಾಗ್) | – | 1 | **1** |
| ಪರಿಶಿಷ್ಟ ಪಂಗಡ (ಬ್ಯಾಕ್ ಲಾಗ್) * | 1 | – | **1** |
| ಪ್ರವರ್ಗ I (ಬ್ಯಾಕ್ ಲಾಗ್) | 1 | – | **1** |
| ಪ್ರವರ್ಗ II (ಎ) (ಬ್ಯಾಕ್ ಲಾಗ್) | 1 | 1 | **2** |
| ಪ್ರವರ್ಗ II (ಬಿ) (ಬ್ಯಾಕ್ ಲಾಗ್) | 1 | – | **1** |
| **ಒಟ್ಟು** | **4** | **2** | **6** |

- **ಸೂಚನೆ :** ಸೂಕ್ತ ಪರಿಶಿಷ್ಟ ಪಂಗಡದ ಅಭ್ಯರ್ಥಿಗಳು ಲಭ್ಯವಿಲ್ಲದಿದ್ದಲ್ಲಿ ಪರಿಶಿಷ್ಟ ಜಾತಿಯ ಅಭ್ಯರ್ಥಿಗಳಿಂದ ತುಂಬಲಾಗುವುದು.

**4. ಶೈಕ್ಷಣಿಕ ವಿದ್ಯಾರ್ಹತೆ:**

ಎ) ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿಯು ನಡೆಸುವ ಎಸ್.ಎಸ್.ಎಲ್.ಸಿ ಪರೀಕ್ಷೆಯಲ್ಲಿ ಉತ್ತೀರ್ಣತೆ ಅಥವಾ ತತ್ಸಮಾನ ವಿದ್ಯಾರ್ಹತೆ.

ಬಿ) ಕರ್ನಾಟಕ ಪ್ರೌಢ ಶಿಕ್ಷಣ ಮಂಡಳಿಯು ನಡೆಸುವ ಹಿರಿಯ ದರ್ಜೆಯ (Senior Grade) ಕನ್ನಡ ಮತ್ತು ಆಂಗ್ಲ ಭಾಷೆಗಳ ಬೆರಳಚ್ಚು ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿರಬೇಕು ಅಥವಾ ತತ್ಸಮಾನ ವಿದ್ಯಾರ್ಹತೆ.

ಸಿ) ಕರ್ನಾಟಕ ಪ್ರೌಢ ಶಿಕ್ಷಣ ಮಂಡಳಿಯು ನಡೆಸುವ ಹಿರಿಯ (Senior Grade) ದರ್ಜೆಯ ಕನ್ನಡ ಮತ್ತು ಆಂಗ್ಲ ಭಾಷೆಗಳ ಶೀಘ್ರಲಿಪಿ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿರಬೇಕು ಅಥವಾ ತತ್ಸಮಾನ ವಿದ್ಯಾರ್ಹತೆ ಅಥವಾ ಡಿಪ್ಲೋಮೊ ಇನ್ ಸೆಕ್ರೆಟೇರಿಯಲ್/ ಕಮರ್ಷಿಯಲ್ ಪ್ರಾಕ್ಟೀಸ್‌ನಲ್ಲಿ ಕನ್ನಡ ಮತ್ತು ಆಂಗ್ಲ ಭಾಷೆಗಳ ಹಿರಿಯ ದರ್ಜೆ ಶೀಘ್ರಲಿಪಿ ಮತ್ತು ಬೆರಳಚ್ಚು ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿರಬೇಕು.

II. **ಬೆರಳಚ್ಚುಗಾರರ ಹುದ್ದೆ**

1. ಹುದ್ದೆಗಳ ಸಂಖ್ಯೆ ಃ 01
2. ವೇತನ ಶ್ರೇಣಿ : 11600–200–12000–250–13000–300–14200–350–15600–400–17200–450–19000–500–21000 ಹಾಗೂ ಲಭ್ಯವಿರುವ ಇತರೆ ಭತ್ಯೆಗಳು.
3. **ಹುದ್ದೆಗಳ ವರ್ಗೀಕರಣಃ**

| ವರ್ಗೀಕರಣ | ಮಹಿಳಾ | ಒಟ್ಟು |
|---|---|---|
| ಸಾಮಾನ್ಯ (ಬ್ಯಾಕ್ ಲಾಗ್) | 1 | 1 |
| **ಒಟ್ಟು** | **1** | **1** |

**4. ಶೈಕ್ಷಣಿಕ ವಿದ್ಯಾರ್ಹತೆಃ**

ಎ) ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿಯು ನಡೆಸುವ ಎಸ್.ಎಸ್.ಎಲ್.ಸಿ ಪರೀಕ್ಷೆಯಲ್ಲಿ ಉತ್ತೀರ್ಣತೆ ಅಥವಾ ತತ್ಸಮಾನ ವಿದ್ಯಾರ್ಹತೆ.

ಬಿ) ಕರ್ನಾಟಕ ಪ್ರೌಢ ಶಿಕ್ಷಣ ಮಂಡಳಿಯು ನಡೆಸುವ ಹಿರಿಯ ದರ್ಜೆಯ (Senior Grade) ಕನ್ನಡ ಮತ್ತು ಆಂಗ್ಲ ಭಾಷೆಗಳ ಬೆರಳಚ್ಚು ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿರಬೇಕು ಅಥವಾ ತತ್ಸಮಾನ ವಿದ್ಯಾರ್ಹತೆ.

**ವಯೋಮಿತಿಃ**

| | | | | |
|---|---|---|---|---|
| ಕನಿಷ್ಠ ವಯೋಮಿತಿ | ಃ | 18 ವರ್ಷ | | |
| ಗರಿಷ್ಠ ವಯೋಮಿತಿ | ಃ | ಸಾಮಾನ್ಯ ವರ್ಗ | – | 35 ವರ್ಷ |
| | | 2ಎ, 2ಬಿ, 3ಎ, 3ಬಿ | – | 38 ವರ್ಷ |
| | | ಪ.ಜಾ, ಪ.ಪಂ, ಪ್ರವರ್ಗ 1 | – | 40 ವರ್ಷ |

ವಿಧವೆಯರಿಗೆ ಹಾಗೂ ಸರ್ಕಾರಿ ಸೇವೆಯಲ್ಲಿರುವವರಿಗೆ ನಿಯಮಾನುಸಾರ ವಯೋಮಿತಿಯಲ್ಲಿ ಸಡಿಲಿಕೆ ನೀಡಲಾಗುವುದು.

**ಆಯ್ಕೆ ವಿಧಾನ** ಃ

ಕರ್ನಾಟಕ ಅಧೀನ ನ್ಯಾಯಾಲಯಗಳು (ಮಿನಿಸ್ಟೀರಿಯಲ್ ಮತ್ತು ಇತರೆ ಹುದ್ದೆಗಳು) (ನೇಮಕಾತಿ) (ತಿದ್ದುಪಡಿ) ನಿಯಮಗಳು 2007ರ ಅನ್ವಯ ನೇರ ನೇಮಕಾತಿಯ ಮೂಲಕ ಆಯ್ಕೆ ಮಾಡಲಾಗುವುದು.

I. **ಶೀಘ್ರಲಿಪಿಗಾರರ ಹುದ್ದೆಗೆ ಈ ಕೆಳಕಂಡ ಅರ್ಹತಾ ಪರೀಕ್ಷೆಯನ್ನು ನಡೆಸಲಾಗುವುದು.**

ಅ) ಒಂದು ನಿಮಿಷಕ್ಕೆ 120 ಶಬ್ಧಗಳಂತೆ 5 ನಿಮಿಷಗಳ ಅವಧಿಯ ಉಕ್ತಲೇಖನ ಮತ್ತು ಅದನ್ನು ಲಿಪ್ಯಂತರ ಮಾಡಲು 45 ನಿಮಿಷಗಳ ಅವಧಿ. (ಗರಿಷ್ಠ 100 ಅಂಕಗಳ ಪರೀಕ್ಷೆಯಲ್ಲಿ ಕನಿಷ್ಠ 50 ಅಂಕಗಳನ್ನು ಪಡೆಯಬೇಕಾಗಿರುತ್ತದೆ).

ಆ) ಶೀಘ್ರಲಿಪಿಗಾರರ ಹುದ್ದೆಗೆ ಅವರು ಪಡೆದಿರುವ ಶೈಕ್ಷಣಿಕ ವಿದ್ಯಾರ್ಹತೆಯ ಅಂಕಗಳು ಮತ್ತು ಅರ್ಹತಾ ಪರೀಕ್ಷೆಯ ಗರಿಷ್ಠ ಅಂಕಗಳ ಆಧಾರದ ಮೇಲೆ ಒಂದು ಹುದ್ದೆಗೆ ಐದು ಅಭ್ಯರ್ಥಿಗಳನ್ನು ಸಂದರ್ಶನಕ್ಕೆ ಕರೆಯಲಾಗುವುದು.

**II. ಬೆರಳಚ್ಚುಗಾರರ ಹುದ್ದೆಗೆಃ**

ಅ) 15 ನಿಮಿಷಗಳ ಉಕ್ತಲೇಖನವನ್ನು ಬೆರಳಚ್ಚುಪಡಿಸುವ ಅರ್ಹತಾ ಪರೀಕ್ಷೆಯನ್ನು ನಡೆಸಲಾಗುವುದು (ಗರಿಷ್ಠ 100 ಅಂಕಗಳ ಪರೀಕ್ಷೆಯಲ್ಲಿ ಕನಿಷ್ಠ 50 ಅಂಕಗಳನ್ನು ಪಡೆಯಬೇಕಾಗಿರುತ್ತದೆ).

ಆ) ಸಂದರ್ಶನ

ಇ) ಶೀಘ್ರಲಿಪಿಗಾರರ / ಬೆರಳಚ್ಚುಗಾರ ಹುದ್ದೆಗಳಿಗೆ 1ಃ5 ರ ಅನುಪಾತದಲ್ಲಿ, ನಿಗದಿಪಡಿಸಿದ ವಿದ್ಯಾರ್ಹತೆಗೆ ಮತ್ತು ಅರ್ಹತಾ ಪರೀಕ್ಷೆಯಲ್ಲಿ ಪಡೆದ ಅಂಕಗಳಿಗೆ ಅನುಗುಣವಾಗಿ, ಅತೀ ಹೆಚ್ಚು ಅಂಕ ಪಡೆದ ಅಭ್ಯರ್ಥಿಗಳನ್ನು ಸಂದರ್ಶನಕ್ಕೆ ಆಯ್ಕೆ ಮಾಡಲಾಗುವುದು, ಅಭ್ಯರ್ಥಿಗಳು ತಮ್ಮ ಸ್ವಂತ ಖರ್ಚಿನಲ್ಲಿ ಸಂದರ್ಶನಕ್ಕೆ ಹಾಜರಾಗುವುದು.

**ಪ್ರಮುಖವಾದ ಸೂಚನೆಗಳುಃ**

ಅಭ್ಯರ್ಥಿಗಳು ಕೆಳಕಂಡ ಪ್ರಮಾಣ ಪತ್ರಗಳ ಒಂದೊಂದು ಛಾಯಾ ಪ್ರತಿ (ಫೋಟೋ ಕಾಪಿ/ಜೆರಾಕ್ಸ್) ಗಳನ್ನು ಸ್ವಯಂ–ದೃಢೀಕರಿಸಿ ಅರ್ಜಿಯೊಂದಿಗೆ ಲಗತ್ತಿಸಬೇಕು. ಅರ್ಜಿಯೊಂದಿಗೆ ಮೂಲ ಪ್ರತಿ (ಒರಿಜಿನಲ್) ಗಳನ್ನು ಲಗತ್ತಿಸುವ ಅವಶ್ಯಕತೆ ಇರುವುದಿಲ್ಲ.

1. ಹುದ್ದೆಗೆ ನಿಗದಿಪಡಿಸಲಾದ ವಿದ್ಯಾರ್ಹತೆಯ ಎಲ್ಲಾ ವರ್ಷಗಳ ಅಂಕಪಟ್ಟಿಗಳು ಹಾಗೂ ಪ್ರಮಾಣ ಪತ್ರಗಳು.
2. ಜನ್ಮ ದಿನಾಂಕವನ್ನು ನಮೂದಿಸಿರುವ ಎಸ್.ಎಸ್.ಎಲ್.ಸಿ. ಅಥವಾ ತತ್ಸಮಾನ ಪರೀಕ್ಷೆಯ ಪ್ರಮಾಣ ಪತ್ರ, ವರ್ಗಾವಣೆ ಪ್ರಮಾಣ ಪತ್ರ, ಜನನ ದಿನಾಂಕವನ್ನು ತೋರಿಸುವ ಸಂಚಿತ ದಾಖಲೆಯ ಉಧೃತ ಭಾಗ.
3. ಅಭ್ಯರ್ಥಿಯು ಕೊನೆಯಲ್ಲಿ ವಿದ್ಯಾಭ್ಯಾಸ ಮಾಡಿದ ಶಾಲಾ, ಕಾಲೇಜಿನ ಮುಖ್ಯೋಪಾಧ್ಯಾಯರು, ಪ್ರಾಂಶುಪಾಲರಿಂದ ಪಡೆದ ಒಂದು ನಡತೆ ಪ್ರಮಾಣ ಪತ್ರ.
4. ಅಭ್ಯರ್ಥಿಯು ನಡತೆಯನ್ನು ದೃಢಿಕರಿಸುವ ಬಗ್ಗೆ ಅವನು ಓದಿರುವ ವಿದ್ಯಾಸಂಸ್ಥೆಗಳಿಗೆ ಸಂಬಂಧಪಡದ ಹಾಗೂ ಅಭ್ಯರ್ಥಿಯ ಸಂಬಂಧಿಗಳಲ್ಲದ ಇಬ್ಬರು ಸ್ಥಳೀಯ ಗಣ್ಯವ್ಯಕ್ತಿಗಳಿಂದ ಪಡೆದ 6 ತಿಂಗಳ ಈಚೆಗಿನ ಎರಡು ನಡತೆ ಪ್ರಮಾಣ ಪತ್ರಗಳು.

**ಇತರೆ ಸೂಚನೆಗಳು:**

1. ಸೇವೆಯಲ್ಲಿರುವ ಅಭ್ಯರ್ಥಿಗಳು ಅರ್ಜಿಯೊಂದಿಗೆ ತಮ್ಮ ಮೇಲಾಧಿಕಾರಿಗಳಿಂದ ಪಡೆದ ದೃಢೀಕರಣ ಹಾಗೂ ಅನುಮತಿ ಪ್ರಮಾಣ ಪತ್ರವನ್ನು ನೀಡತಕ್ಕದ್ದು.
2. ಅರ್ಜಿಗಳನ್ನು ಸ್ವೀಕರಿಸಲು ನಿಗದಿಪಡಿಸಿದ ಕೊನೆಯ ದಿನಾಂಕವು ಸಾರ್ವತ್ರಿಕ ರಜಾ ದಿನವಾಗಿ ಘೋಷಿಸಲ್ಪಟ್ಟರೆ ಆ ದಿನಾಂಕದ ಮಾರನೆಯ ಕೆಲಸದ ದಿನವು ಅರ್ಜಿಗಳನ್ನು ಸ್ವೀಕರಿಸಲು ಕೊನೆಯ ದಿನಾಂಕವಾಗುವುದು.
3. ಅರ್ಜಿಯೊಂದಿಗೆ 6 ರೂಪಾಯಿಯ ಅಂಚೆ ಮುದ್ರಾಂಕ (Postal Stamp) ವನ್ನು ಹೊಂದಿರುವ ಸ್ವ–ವಿಳಾಸದ ಲಕೋಟೆಯನ್ನು ಸಲ್ಲಿಸತಕ್ಕದ್ದು.
4. ಅರ್ಜಿಯೊಂದಿಗೆ ಅಭ್ಯರ್ಥಿಗಳು ತಮ್ಮ ಇತ್ತೀಚಿನ ಒಂದು ಭಾವಚಿತ್ರವನ್ನು ಸ್ವ–ದೃಢೀಕರಿಸಿ ಲಗತ್ತಿಸಬೇಕು.
5. ಸಂದರ್ಶನಕ್ಕೆ ಆಯ್ಕೆಯಾದ ಅಭ್ಯರ್ಥಿಗಳು ತಮ್ಮ ಸ್ವಂತ ಖರ್ಚಿನಲ್ಲಿಯೇ ಸಂದರ್ಶನಕ್ಕೆ ಹಾಜರಾಗಬೇಕು ಹಾಗೂ ಸಂದರ್ಶನ ಪತ್ರ ಬಾರದಿರುವ ಅಭ್ಯರ್ಥಿಗಳು ಸಂದರ್ಶನಕ್ಕೆ ಅರ್ಹರಲ್ಲವೆಂದು ಭಾವಿಸಿಕೊಳ್ಳತಕ್ಕದ್ದು.
6. ಆಯ್ಕೆಯ ಸಂಬಂಧವಾಗಿ ಸಂದರ್ಶನಕ್ಕೆ ಅನರ್ಹರಾದ ಅಭ್ಯರ್ಥಿಗಳು ಈ ಕಛೇರಿಯೊಂದಿಗೆ ಯಾವುದೇ ಪತ್ರ ವ್ಯವಹಾರವನ್ನು ನಡೆಸಲು ಆಸ್ಪದವಿರುವುದಿಲ್ಲ.

**ವಿಶೇಷ ಸೂಚನೆ:**

1. ಮೇಲ್ಕಂಡ ಹುದ್ದೆಗಳಿಗೆ ಅರ್ಜಿಗಳನ್ನು ರಾಮನಗರ ಪ್ರಧಾನ ಜಿಲ್ಲಾ ನ್ಯಾಯಾಲಯದ ಕಛೇರಿಯಲ್ಲಿ ವಿತರಿಸಲಾಗುತ್ತದೆ.
2. ಅರ್ಜಿಗಳನ್ನು ಪಡೆಯ ಬಯಸುವ ಅಭ್ಯರ್ಥಿಯು ಕ್ರಾಸ್ ಮಾಡಿದ 10 ರೂ.ಗಳ ಭಾರತೀಯ ಪೋಸ್ಟಲ್ ಆರ್ಡರ್ ಅಥವಾ ಬ್ಯಾಂಕ್ ಡಿ.ಡಿ.ಯನ್ನು **"ಪ್ರಧಾನ ಜಿಲ್ಲಾ ನ್ಯಾಯಾಧೀಶರು, ರಾಮನಗರ"** ರವರ ಹೆಸರಿಗೆ ಪಡೆದು ರಾಮನಗರ ಜಿಲ್ಲಾ ನ್ಯಾಯಾಲಯದ ಕಛೇರಿಗೆ ಸಲ್ಲಿಸಿ ಪಡೆಯಬಹುದು. ಪೋಸ್ಟಲ್ ಆರ್ಡರ್ ಅಥವಾ ಬ್ಯಾಂಕ್ ಡಿ.ಡಿ.ಯನ್ನು ಈ ನೇಮಕಾತಿ ಪ್ರಕಟಣಾ ದಿನದಿಂದ 15 ದಿವಸಗಳಿಗಿಂತ ಮುಂಚಿತವಾಗಿ ಪಡೆದಿರಬಾರದು. ಅಂಚೆ ಮೂಲಕ ಅರ್ಜಿ ಪಡೆಯಬಯಸುವ ಅಭ್ಯರ್ಥಿಗಳು 30 ರೂ. ಅಂಚೆ ಚೀಟಿ ಅಂಟಿಸಿದ ಸ್ವ–ವಿಳಾಸ ಬರೆದ ಲಕೋಟೆಯನ್ನು ಮತ್ತು 10 ರೂ. ಪೋಸ್ಟಲ್ ಆರ್ಡರ್ ಅಥವಾ ಬ್ಯಾಂಕ್ ಡಿ.ಡಿ.ಯ ಸಮೇತ ಕಳುಹಿಸಿದ್ದಲ್ಲಿ ಅರ್ಜಿಯನ್ನು ಕಳುಹಿಸಲಾಗುವುದು.
3. ಭರ್ತಿ ಮಾಡಿದ ಅರ್ಜಿಯ ಜೊತೆಗೆ ರೂ.50/–(ಎಸ್.ಸಿ/ಎಸ್.ಟಿ ಮತ್ತು ಪ್ರವರ್ಗ–1ಕ್ಕೆ ರೂ.30/–) ಪೋಸ್ಟಲ್ ಆರ್ಡರ್ ಅಥವಾ ಬ್ಯಾಂಕ್ ಡಿ.ಡಿ.ಯನ್ನು **"ಪ್ರಧಾನ ಜಿಲ್ಲಾ ನ್ಯಾಯಾಧೀಶರು, ರಾಮನಗರ"** ರವರ ಹೆಸರಿನಲ್ಲಿ ಪಡೆದು ಪ್ರೊಸೆಸಿಂಗ್ ಶುಲ್ಕವಾಗಿ ಲಗತ್ತಿಸಿ **ದಿನಾಂಕ: 09.05.2014 ರ ಶುಕ್ರವಾರ ಸಂಜೆ 4.00 ಗಂಟೆಯೊಳಗೆ** ಪ್ರಧಾನ ಜಿಲ್ಲಾ ನ್ಯಾಯಾಧೀಶರು, ಜಿಲ್ಲಾ ನ್ಯಾಯಾಲಯ, ರಾಮನಗರ ರವರಿಗೆ ಸಲ್ಲಿಸತಕ್ಕದ್ದು.
4. ಕೊನೆಯ ದಿನಾಂಕದ ನಂತರ ಸಲ್ಲಿಸಲಾದ ಯಾವುದೇ ಅರ್ಜಿಗಳನ್ನು ಪರಿಗಣಿಸಲಾಗುವುದಿಲ್ಲ.

ನಿಗದಿತ ಅರ್ಜಿ ನಮೂನೆಯಲ್ಲಿ ಎಲ್ಲಾ ಅಂಕಣಗಳನ್ನು ಅಭ್ಯರ್ಥಿಗಳು ತಮ್ಮ ಬರಹದಿಂದಲೇ ಭರ್ತಿ ಮಾಡಿರತಕ್ಕದ್ದು. ಸರಿಯಾಗಿ ಅಂಕಣಗಳನ್ನು ಭರ್ತಿ ಮಾಡದೇ ಇರುವ ಅರ್ಜಿಗಳನ್ನು ತಿರಸ್ಕರಿಸಲಾಗುವುದು.

**ಎಂ.ಕೆ. ಪ್ರಹ್ಲಾದ**
ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು,
ರಾಮನಗರ.

**PR- 40**
**SC-10**

## FORM-I

**(See Rule 9)**

**EDUCATION DEPARTMENT**

**Office of the Deputy Director of Public Instructions Belgaum (South)**

**NOTIFICATION, Dated: 19-02-2014**

Sri/Smt. **BISMILLABEGM SHAMSHIRSAHEB** Working as Assistant Teacher, Govt. Primary Kannada Boys School Karainkumpi Belgaum Taluk, Belgaum Dist. is permitted to change his/her name to **BISMILLABEGM JAKEERPASHA KALIMIRCHI.**

**PD C/n. 48**
**SC - 10**

**Deputy Director,**
**Pubic Instruction Department**
**Belgaum (South)**

R.N.I. No. KARBIL/2001/47147 POSTAL REGN. No. RNP/KA/BGS/2202/2014-16
Licensed to post without prepayment **WPP No. 297**



## FORM-IV

**(See Rule 12)**

**NOTICE**

It is hereby notified that the undersigned has changed her name from **DR. MAMATHA ACHARYA** to **DR. MAMATHA V RAO.**

**PD C/n. 46** **DR. MAMATHA ACHARYA**
**SC - 10**

## FORM- I

**(See Rule 9)**

**EDUCATION DEPARTMENT**

**Office of the Deputy Director of Public Instructions, Bijapur**

**NOTIFICATION, Dated: 02-01-2014**

Sri **HANAMANTH MADIVALAPPA. CHALAWADI** Working as Assistant Teacher, **K.B.M.P.S. Muddebihal, Muddebihal Taluk, Bijapur Dist** is permitted to change his name to **HANUMANTH MADIVALAPPA. TAMADADDI..**

**PD C/n. 47** Block Education Officer
**SC - 10** Muddebihal, Dist: Bijapur

## ಕರ್ನಾಟಕ ಲೋಕ ಸೇವಾ ಆಯೋಗದ ನಡವಳಿಗಳು

**ವಿಷಯ :** ಸಾರ್ವಜನಿಕ ಗ್ರಂಥಾಲಯದ ಇಲಾಖೆಯಲ್ಲಿನ ಸಹಾಯಕ ಗ್ರಂಥಪಾಲಕರ 10 ಹುದ್ದೆಗಳ ನೇಮಕಾತಿಗೆ ಅಭ್ಯರ್ಥಿಯಾದ ಶ್ರೀಮತಿ ಎಂ.ಎಸ್. ಉಷಾರಾಣಿ, ಇವರು ದುರ್ನಡತೆ ಎಸಗಿರುವ ಹಿನ್ನೆಲೆಯಲ್ಲಿ ದಂಡನೆಯನ್ನು ವಿಧಿಸುವ ಬಗ್ಗೆ.

**ಪ್ರಸ್ತಾವನೆ:–**

ಸಾರ್ವಜನಿಕ ಗ್ರಂಥಾಲಯ ಇಲಾಖೆಯಲ್ಲಿನ ಸಹಾಯಕ ಗ್ರಂಥಪಾಲಕರ ಹುದ್ದೆಗೆ ಶ್ರೀಮತಿ ಎಂ.ಎಸ್. ಉಷಾರಾಣಿ, ಇವರು ಅಭ್ಯರ್ಥಿಯಾಗಿದ್ದು ಆಯೋಗವು ದಿನಾಂಕ: 01–07–2012 ಮತ್ತು 08–07–2012ರಂದು ನಡೆಸಿದ ಸ್ಪರ್ಧಾತ್ಮಕ ಪರೀಕ್ಷೆಗೆ ಹಾಗೂ ದಿನಾಂಕ: 07–01–2013 ರಂದು ನಡೆದ ಸಂದರ್ಶನಕ್ಕೆ ಹಾಜರಾಗಿರುತ್ತಾರೆ. ಸಹಾಯಕ ಗ್ರಂಥಪಾಲಕರ ಸಂದರ್ಶನಗಳು ಮುಕ್ತಾಯವಾಗಿದ್ದು, ನ್ಯಾಯಾಲಯದ ಆದೇಶದಂತೆ ತಾತ್ಕಾಲಿಕ ಆಯ್ಕೆಪಟ್ಟಿಯನ್ನು ಪ್ರಕಟಿಸಿರುವುದಿಲ್ಲ. ಈ ಹಂತದಲ್ಲಿಯೇ ಇವರು ಆಯೋಗದ ಮೇಲೆ ಮುಂದಾಲೋಚನೆ ಇಲ್ಲದೆ ಸತ್ಯಕ್ಕೆ ದೂರವಾದ ಸುಳ್ಳು ಆಪಾದನೆಗಳನ್ನು ಮಾಡಿ ಮಾನ್ಯ ರಾಜ್ಯಪಾಲರಿಗೆ ಹಾಗೂ ಆಯೋಗಕ್ಕೂ ಸೇರಿದಂತೆ ಇನ್ನಿತರೇ ಪ್ರಾಧಿಕಾರಿಗಳಿಗೆ ದೂರನ್ನು ನೀಡಿರುತ್ತಾರೆ.

ಇದು ಅಶಿಸ್ತಿನ ನಡೆವಳಿಕೆಯಾಗಿದ್ದು, ಸಾಮಾನ್ಯ ನೇಮಕಾತಿ ನಿಯಮಗಳು 1977ರ ನಿಯಮ 20 ಅನ್ನು ವ್ಯಾಖ್ಯಾನಿಸಿದಂತೆ "...... ಅಭ್ಯರ್ಥಿಯು ತಪ್ಪು ಅಥವಾ ಸುಳ್ಳು ಹೇಳಿಕೆ ನೀಡಿರುವನೆಂದು ... ಅಥವಾ ....ನೇಮಕಾತಿಯ ಸಂಬಂಧದಲ್ಲಿ ಯಾವುದೇ ಇತರೆ ಅಕ್ರಮ ಮತ್ತು ಅನುಚಿತ ಮಾರ್ಗವನ್ನು ಅವಲಂಬಿಸಿರುವಿರೆಂದು..... " ಭಾವಿಸಿ ಇವರ ವಿರುದ್ಧ, ಈ ಅಶಿಸ್ತು ನಡವಳಿಕೆಗೆ ಸದರಿ ನಿಯಮಗಳನ್ವಯ ಏಕೆ ಶಿಸ್ತು ಕ್ರಮ ಕೈಗೊಳ್ಳಬಾರದೆಂದು ಕಾರಣ ಕೇಳುವ ನೋಟೀಸ್ ಅನ್ನು ಜಾರಿ ಮಾಡಿ, ಸಮಜಾಯಿಷಿಯನ್ನು ಪಡೆದು ವಿಚಾರಣೆ ಮಾಡಲಾಗಿ, ವಿಚಾರಣಾಧಿಕಾರಿಯವರು ಸದರಿ ಅಭ್ಯರ್ಥಿಯ ಮೇಲಿನ ಆರೋಪವು ನಿಸ್ಸಂದೇಯವಾಗಿ ಸಾಬೀತಾಗಿರುತ್ತದೆ ಎಂದು ವರದಿಯನ್ನು ನೀಡಿರುತ್ತಾರೆ. ಆಯೋಗದ ದಿನಾಂಕ: 12–03–2014ರ ಸಭೆಯಲ್ಲಿ ನಿರ್ಣಯವಾದಂತೆ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ :–

**ಆದೇಶ ಸಂಖ್ಯೆ ಆರ್(4) 292/13–14/ಪಿಎಸ್‌ಸಿ ಬೆಂಗಳೂರು ದಿನಾಂಕ:19–03–2014**

ಕರ್ನಾಟಕ ಲೋಕ ಸೇವಾ ಆಯೋಗವು ಕರ್ನಾಟಕ ನಾಗರೀಕ ಸೇವೆಗಳು (ಸಾಮಾನ್ಯ ನೇಮಕಾತಿ) ನಿಯಮಗಳು 1977ರ ನಿಯಮ–20 ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸಾರ್ವಜನಿಕ ಗ್ರಂಥಾಲಯ ಇಲಾಖೆಯಲ್ಲಿನ ಸಹಾಯಕ ಗ್ರಂಥಪಾಲಕರ ಹುದ್ದೆಯ ನೇಮಕಾತಿಯ ಅಭ್ಯರ್ಥಿಯಾದ ಶ್ರೀಮತಿ ಎಂ.ಎಸ್. ಉಷಾರಾಣಿ, ಪರೀಕ್ಷಾ ನೋಂದಣಿ ಸಂಖ್ಯೆ 100483 (ಸಂದರ್ಶನ ಸಂಖ್ಯೆ 18) ರವರ ಸದರಿ ಹುದ್ದೆಯ ಅಭ್ಯರ್ಥಿತ್ವವನ್ನು ರದ್ದುಪಡಿಸಿದೆ ಹಾಗೂ ಆಯೋಗವು ನಡೆಸುವ ಯಾವುದೇ ಪರೀಕ್ಷೆ ಅಥವಾ ಯಾವುದೇ ನೇಮಕಾತಿ ಸಂದರ್ಶನಕ್ಕೆ ಒಂದು ವರ್ಷದ ಅವಧಿಗೆ ಡಿಬಾರ್ ಮಾಡುವ ದಂಡನೆಯನ್ನು ವಿಧಿಸಿದೆ.

ಆಯೋಗದ ಆದೇಶದ ಮೇರೆಗೆ,
**ಮನೋಜ್ ಕುಮಾರ್ ಮೀನಾ, ಭಾ.ಆ.ಸೇ.,**
ಕಾರ್ಯದರ್ಶಿ
ಕರ್ನಾಟಕ ಲೋಕಸೇವಾ ಆಯೋಗ, ಬೆಂಗಳೂರು

**PR-38**
**SC - 25**

*ಮುದ್ರಕರು ಹಾಗೂ ಪ್ರಕಾಶಕರು:–* ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯಪತ್ರ, ಸರ್ಕಾರಿ ಕೇಂದ್ರ ಮುದ್ರಣಾಲಯ, ಬೆಂಗಳೂರು–59